# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 991 (1129)
ಸದಸ್ಯರ ಹೆಸರು : ಡಾ: ಚಂದ್ರಶೇಖರ್ ಬಿ . ಪಾಟೀಲ (ಪದವೀಧರರ ಕ್ಷೇತ್ರ)
ಉತ್ತರಿಸುವ ದಿನಾಂಕ : 07-03-2022
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಕಲ್ಯಾಣ ಕರ್ನಾಟಕ ಭಾಗದ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಉಪನ್ಯಾಸಕರ ಹಾಗೂ ಪ್ರಾಚಾರ್ಯರ ಹುದ್ದೆ ಖಾಲಿಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಹೌದು |
| ಆ) | ಬಂದಿದ್ದಲ್ಲಿ, ಸರ್ಕಾರವು ಇಲ್ಲಿಯವರೆಗೆ ಖಾಲಿ ಹುದ್ದೆ ಭರ್ತಿ ಮಾಡಲು ಕೈಗೊಂಡ ಕ್ರಮವೇನು: | ಕಲ್ಯಾಣ ಕರ್ನಾಟಕ ಭಾಗದ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಈ ಕೆಳಕಂಡಂತೆ ಪ್ರಾಚಾರ್ಯರ ಹುದ್ದೆಗಳನ್ನು ತುಂಬಲು ಈಗಾಗಲೇ ಕ್ರಮವಹಿಸಲಾಗಿದೆ–<br>• ಸರ್ಕಾರದ ಅಧಿಸೂಚನೆ ಸಂಖ್ಯೆ:ಇಪಿ 16 ಡಿಜಿಡಿ 2021, ದಿನಾಂಕ:04-08-2021ರಲ್ಲಿ ಕಲ್ಯಾಣ ಕರ್ನಾಟಕ ಭಾಗದ ಸರ್ಕಾರಿ ಪದವಿ ಪೂರ್ವ ಕಾಲೇಜುಗಳ ಒಟ್ಟು 06 ಪ್ರಾಚಾರ್ಯರ ಹುದ್ದೆಗಳನ್ನು ಬಡ್ತಿ ಮೂಲಕ ತುಂಬಲಾಗಿದೆ.<br>• ಸರ್ಕಾರದ ಅಧಿಸೂಚನೆ ಸಂಖ್ಯೆ:ಇಪಿ 8 ಡಿಜಿಡಿ 2021 ದಿನಾಂಕ:30-10-2021 ಮತ್ತು ದಿನಾಂಕ:27-12-2021ರಲ್ಲಿ ಕಲ್ಯಾಣ ಕರ್ನಾಟಕ ಭಾಗದ ಸರ್ಕಾರಿ ಪದವಿ ಪೂರ್ವ ಕಾಲೇಜುಗಳ ಒಟ್ಟು 14 ಪ್ರಾಚಾರ್ಯರ ಹುದ್ದೆಗಳನ್ನು ಬಡ್ತಿ ಮೂಲಕ ತುಂಬಲಾಗಿದೆ.<br>• ಕಲ್ಯಾಣ ಕರ್ನಾಟಕ ವೃಂದದ 39 ಪ್ರಾಂಶುಪಾಲರ ಹುದ್ದೆಗಳು ಸೇರಿದಂತೆ ನೇರ ನೇಮಕಾತಿ ಕೋಟಾದ ಒಟ್ಟು 255 ಪ್ರಾಂಶುಪಾಲರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ತುಂಬಲು ನೇಮಕಾತಿ ಪ್ರಕ್ರಿಯೆ ನಡೆಸಿ ಅರ್ಹ ಅಭ್ಯರ್ಥಿಗಳ ಆಯ್ಕೆಪಟ್ಟಿಯನ್ನು ಸಿದ್ಧಪಡಿಸಿ ಸಲ್ಲಿಸುವಂತೆ ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ಪರೀಕ್ಷಾ ಪ್ರಾಧಿಕಾರ, ಬೆಂಗಳೂರು ಇವರಿಗೆ ತಿಳಿಸಲಾಗಿದೆ. |

| | | |
|---|---|---|
| | | ಉಪನ್ಯಾಸಕರ ನೇರ ನೇಮಕಾತಿಗೆ ವಿವಿಧ ವಿಷಯಗಳಿಗೆ ಸಂಬಂಧಪಟ್ಟಂತೆ ಒಟ್ಟು 1439(ಕಲ್ಯಾಣ ಕರ್ನಾಟಕ ಭಾಗದ ಖಾಲಿ ಹುದ್ದೆಗಳು ಸೇರಿದಂತೆ) ಉಪನ್ಯಾಸಕರ ಹುದ್ದೆಗಳನ್ನು ತುಂಬುವ ಪ್ರಸ್ತಾವನೆ ಬಗ್ಗೆ ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿದೆ. ಆರ್ಥಿಕ ಇಲಾಖೆಯ ಸಹಮತಿ ಬಂದ ನಂತರ ಈ ಬಗ್ಗೆ ಕ್ರಮವಹಿಸಲಾಗುವುದು. |
| ಇ) | ಕಲ್ಯಾಣ ಕರ್ನಾಟಕ ಭಾಗದ ಎಷ್ಟು ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಉಪನ್ಯಾಸಕರ ಹಾಗೂ ಪ್ರಾಚಾರ್ಯರ ಹುದ್ದೆ ಖಾಲಿ ಇವೆ? (ವಿವರ ನೀಡುವುದು) | 1. ಕಲ್ಯಾಣ ಕರ್ನಾಟಕ ಭಾಗದ 07 ಜಿಲ್ಲೆಗಳಲ್ಲಿ ಫೆಬ್ರವರಿ 2022ರ ಅಂತ್ಯಕ್ಕೆ ಒಟ್ಟು 453 ವಿವಿಧ ವಿಷಯಗಳ ಉಪನ್ಯಾಸಕರ ಹುದ್ದೆಗಳು ಖಾಲಿ ಇರುತ್ತದೆ.<br>2. ಪ್ರಸ್ತುತ ಕಲ್ಯಾಣ ಕರ್ನಾಟಕ ಭಾಗದ 07 ಜಿಲ್ಲೆಗಳಲ್ಲಿ ಫೆಬ್ರವರಿ 2022ರ ಅಂತ್ಯಕ್ಕೆ ಒಟ್ಟು 46 ಪ್ರಾಂಶುಪಾಲರ ಹುದ್ದೆಗಳು ಖಾಲಿ ಇರುತ್ತದೆ. ಇದರಲ್ಲಿ ನೇರ ನೇಮಕಾತಿಗೆ 39 ಹಾಗೂ ಬಡ್ತಿಗೆ 07 ಪ್ರಾಂಶುಪಾಲರ ಹುದ್ದೆಗಳು ಖಾಲಿ ಇರುತ್ತವೆ(ವಿವರವನ್ನು ಅನುಬಂಧ-ಅ ರಲ್ಲಿ ಒದಗಿಸಿದೆ). |

**ಸಂಖ್ಯೆ: ಇಪಿ 40 ಡಿಜಿಡಬ್ಲ್ಯೂ 2022**

(ಬಿ.ಸಿ. ನಾಗೇಶ್)

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ಹಾಗೂ ಸಕಾಲ ಸಚಿವರು

ಟಿಪ್ಪಣಿ

ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಪ್ರಾಂಶುಪಾಲರ ಹುದ್ದೆಗಳಿಗೆ ಸಂಬಂಧಿಸಿದಂತೆ ಬಡ್ತಿ ಹುದ್ದೆಗಳ ವಿವರ

ಕೋಷ್ಟಕ – 1

| ವ್ಯಾಪ್ತಿ | ವೃಂದ ಬಲ | | ಕಾರ್ಯ ನಿರ್ವಹಿಸುತ್ತಿರುವವರ ವೃಂದ ಬಲ | | ಖಾಲಿ ಹುದ್ದೆಗಳು | | ಒಟ್ಟು |
|---|---|---|---|---|---|---|---|
| | ನೇರ | ಬಡ್ತಿ | ನೇರ | ಬಡ್ತಿ | ನೇರ | ಬಡ್ತಿ | |
| ಕಲ್ಯಾಣ ಕರ್ನಾಟಕ ರಾಜ್ಯ ವ್ಯಾಪಿ ಸ್ಥಳೀಯ ವೃಂದ | 39 | 118 | – | 111 | 39 | 07 | 46 |
| ಇತರೆ ಉಳಿಕೆ ವೃಂದ | 266 | 797 | – | 792 | 266 | 05 | 271 |
| ಒಟ್ಟು | 305 | 915 | – | 903 | 305 | 12 | 317 |

ಜಂಟಿ ನಿರ್ದೇಶಕರು(ಆಡಳಿತ),
ಪದವಿ ಪೂರ್ವ ಶಿಕ್ಷಣ ಇಲಾಖೆ.